# ಶಿಕ್ಷಕರಿಗೊಂದು ಮನವಿ
## ಅನುರಾಗ್ ಬೆಹರ್

2020ರ ಜುಲೈ 29ರಂದು ಕೇಂದ್ರ ಸಚಿವ ಸಂಪುಟವು ಅಂಗೀಕರಿಸಿದ ರಾಷ್ಟ್ರೀಯ ಶಿಕ್ಷಣ ನೀತಿ 2020 (ಎನ್ಇಪಿ), ಈ ಹಿಂದಿನ 'ರಾಷ್ಟ್ರೀಯ ಶಿಕ್ಷಣ ನೀತಿ 1986'ರ ಜಾಗದಲ್ಲಿ ಬಂದಿದೆ. ಕಳೆದ 34 ವರ್ಷಗಳಲ್ಲಿ ಶಿಕ್ಷಣ ನೀತಿಗಳನ್ನು ಬದಲಾಯಿಸಿಲ್ಲ ಅಥವಾ ಅದರಲ್ಲಿ ಸಣ್ಣಪುಟ್ಟ ಬದಲಾವಣೆಗಳನ್ನು ಮಾಡಿಲ್ಲ ಎಂದಲ್ಲ. ಆದರೆ, ಮೂರು ದಶಕಗಳ ನಂತರ, ಹೆಚ್ಚು ಕಡಿಮೆ ಭಾರತೀಯ ಶಿಕ್ಷಣದ ಎಲ್ಲ ಅಂಶಗಳಿಗೂ ಸಂಬಂಧಿಸಿದಂತೆ ಒಂದು ಸಮಗ್ರ ನೀತಿಯನ್ನು ಅಭಿವೃದ್ಧಿ ಪಡಿಸಿರುವುದು ಈಗಲೇ.

ಈ ರಾಷ್ಟ್ರೀಯ ಶಿಕ್ಷಣ ನೀತಿಯಿಂದ ಏನನ್ನು ನಿರೀಕ್ಷಿಸಲಾಗದು ಎಂಬುದನ್ನು ನೆನಪಿನಲ್ಲಿಟ್ಟುಕೊಳ್ಳುವುದು ಉಪಯುಕ್ತವಾಗುತ್ತದೆ. ಅದು ಕೇಂದ್ರ ಮತ್ತು ರಾಜ್ಯ ಸರ್ಕಾರಗಳೆರಡೂ ಈಗ ಅಭಿವೃದ್ಧಿಪಡಿಸಬೇಕಿರುವ ಅನುಷ್ಠಾನದ ಯೋಜನೆ ಅಲ್ಲ. ಅದೊಂದು ಕಾನೂನು ಅಲ್ಲ; ಅದನ್ನು ಜಾರಿಗೊಳಿಸಲು ಸಂಸತ್ತು ಮತ್ತು ರಾಜ್ಯ ಶಾಸನ ಸಭೆಗಳು ಅನೇಕ ವಿಷಯಗಳಿಗೆ ಸಂಬಂಧಿಸಿದಂತೆ ಕಾನೂನಾತ್ಮಕ ಕ್ರಿಯೆಗಳನ್ನು ಜಾರಿಗೊಳಿಸಬೇಕಾಗುತ್ತದೆ.

ತನ್ನ ತಿರುಳಿನಲ್ಲಿ, ರಾಷ್ಟ್ರೀಯ ಶಿಕ್ಷಣ ನೀತಿಯು ಭಾರತೀಯ ಶಿಕ್ಷಣದ ಧ್ಯೇಯೋದ್ದೇಶಗಳನ್ನು, ಈಗ ಅಸ್ತಿತ್ವದಲ್ಲಿರುವ ವ್ಯವಸ್ಥೆಗಳು, ಸಂಸ್ಥೆಗಳು, ರೂಢಿಗಳು ಮತ್ತು ಸಂಪನ್ಮೂಲಗಳ ಮೂಲಕ ಸಾಧಿಸಲಿಕ್ಕಾಗಿ ವಿನ್ಯಾಸಗೊಳಿಸಲಾಗಿರುವ ಒಂದು ಸುಸಂಬದ್ಧ ಚೌಕಟ್ಟಾಗಿದೆ. ಇದೊಂದು 64 ಪುಟಗಳ ದಸ್ತಾವೇಜು ಆಗಿದ್ದು, 2019ರಲ್ಲಿ ಕೇಂದ್ರಕ್ಕೆ ಕಸ್ತೂರಿರಂಗನ್ ಸಮಿತಿಯು ಅಭಿವೃದ್ಧಿಪಡಿಸಿ ಸಲ್ಲಿಸಿದ 484 ಪುಟಗಳ ಕರಡು ರಾಷ್ಟ್ರೀಯ ಶಿಕ್ಷಣ ನೀತಿ (ಡಿಎನ್ಇಪಿ) ಅನ್ನು ಆಧರಿಸಿದೆ. ನಾನು, ಡಿಎನ್ಇಪಿಯ (ಕರಡು ರಾಷ್ಟ್ರೀಯ ಶಿಕ್ಷಣ ನೀತಿಯ) ರಚನಾ ಸಮಿತಿಯ ಸದಸ್ಯನಾಗಿದ್ದೆ.

ಕೇವಲ ಕೆಲವು ವಿಷಯಗಳಿಗೆ ಸಂಬಂಧಿಸಿದಂತೆ ಮಾತ್ರ ರಾಷ್ಟ್ರೀಯ ಶಿಕ್ಷಣ ನೀತಿಯು, ಕರಡು ರಾಷ್ಟ್ರೀಯ ಶಿಕ್ಷಣ ನೀತಿಯಿಂದ ಮುಖ್ಯವಾಗಿ ದೂರ ಸರಿದಿದೆ. ಕರಡು ರಾಷ್ಟ್ರೀಯ ಶಿಕ್ಷಣ ನೀತಿಯಲ್ಲಿ ಪ್ರಸ್ತಾಪಿಸಲಾಗಿರುವ ರಾಷ್ಟ್ರೀಯ ಶಿಕ್ಷಣ ಆಯೋಗವು, ರಾಷ್ಟ್ರೀಯ ಶಿಕ್ಷಣ ನೀತಿಯಲ್ಲಿ ಸೇರಿಲ್ಲ. ಆದರೆ ಅದು ಇಲ್ಲದಿರುವುದು ರಾಷ್ಟ್ರೀಯ ಶಿಕ್ಷಣ ನೀತಿಯ ಮೂಲ ಚೈತನ್ಯವನ್ನಾಗಲೀ, ಉದ್ದೇಶವನ್ನಾಗಲೀ ತಿಳಿಗೊಳಿಸಿಲ್ಲ. ಅದನ್ನು ಬಿಟ್ಟು ಇನ್ನೂ ಕೆಲವು ಅಂಶಗಳಿವೆ, ಅವುಗಳನ್ನು ನಾನಿಲ್ಲಿ ಹೆಸರಿಸಲಾರೆ. ನಾನಿಲ್ಲಿ ನನ್ನ ಸಣ್ಣಪುಟ್ಟ ಭಿನ್ನಾಭಿಪ್ರಾಯಗಳನ್ನೇ ದೊಡ್ಡದು ಮಾಡುವ ಆತ್ಮರತಿಗೆ ಬಲಿಯಾಗಲಾರೆ; ದೊಡ್ಡ

ಪ್ರಮಾಣದಲ್ಲಿ ಒಪ್ಪಿಗೆ ಇದ್ದರೂ ಸಹ ಕೆಲವು ಭಿನ್ನಾಭಿಪ್ರಾಯಗಳ ಬಗ್ಗೆ ಅನವಶ್ಯಕವಾಗಿ ವಿಪರೀತ ಶಕ್ತಿಯನ್ನು ವ್ಯರ್ಥ ಮಾಡುವಂತಹ ಪ್ರವೃತ್ತಿಯ ಬಗ್ಗೆ ನಾನು ಹಿಂದೆಯೇ ಬರೆದಿದ್ದೇನೆ (ನೋಡಿರಿ: 'ಜೀವಕಳೆ ತುಂಬಿರುವ ತರಗತಿಗಳು ಮತ್ತು ಸಣ್ಣ ಭಿನ್ನಮತಗಳ ಆತ್ಮರತಿ').

ಶಿಕ್ಷಣ ನೀತಿಯು ಒಂದು ವಿವಾದಾಸ್ಪದವಾದ ವಿಷಯ. ಅದರಲ್ಲಿ ಜನತೆಯ ಆಶೋತ್ತರಗಳು, ಭರವಸೆಗಳು ಅಡಕವಾಗಿರುತ್ತವೆ. ಅದು ಅಧಿಕಾರಕ್ಕೆ, ರಾಜಕೀಯಕ್ಕೆ ಮತ್ತು ಸಿದ್ಧಾಂತಕ್ಕೂ ಸಹ ಒಂದು ವಾಹಕ, ಒಂದು ಪ್ರಕ್ರಿಯೆ ಮತ್ತು ಒಂದು ರಂಗಭೂಮಿ. ಅದು ಜ್ಞಾನಾರ್ಜನೆ ಮತ್ತು ಪ್ರಸರಣೆಗೆ ಸಂಬಂಧಿಸಿದ ಸದೃಢತೆಯನ್ನು ಕಾಯ್ದುಕೊಳ್ಳುವ ಜೊತೆಗೆ, ಶೈಕ್ಷಣಿಕವಾಗಿಯೂ ಪರಿಣಾಮಕಾರಿಯಾಗಿದ್ದು, ನೀತಿಯು ಇವೆಲ್ಲ ಅಂಶಗಳೊಂದಿಗೆ ತೊಡಗಿಕೊಳ್ಳಬೇಕು ಮತ್ತು ಮೇಲಿನ ಆಶಯಗಳನ್ನು ಪೂರೈಸಬೇಕು; ಹಾಗೂ ಇವೆಲ್ಲವನ್ನು ಪರಿಮಿತ ಸಂಪನ್ಮೂಲಗಳೊಂದಿಗೆ ನೆರವೇರಿಸಬೇಕು.

ಹೀಗಾಗಿ ರಾಷ್ಟ್ರೀಯ ಶಿಕ್ಷಣ ನೀತಿಗೆ ದೊರಕಿರುವ ವ್ಯಾಪಕ ಸಕಾರಾತ್ಮಕ ಪ್ರತಿಕ್ರಿಯೆಯು ಗಮನಾರ್ಹವಾದುದಾಗಿದೆ. ವಿರೋಧಿ ರಾಜಕೀಯ ಪಕ್ಷಗಳಿಗೆ ಸೇರಿದ ಕೆಲವು ನಾಯಕರು ಸಹ ಇದನ್ನು ಪ್ರಶಂಸಿಸಲೇಬೇಕಾದ ಅನಿವಾರ್ಯತೆಗೆ ಒಳಗಾಗಿದ್ದಾರೆ. ಶಿಕ್ಷಣದಲ್ಲಿ ತೊಡಗಿಕೊಂಡಿರುವ ಜನರು ಸಹ ಅದೇ ಪ್ರಮಾಣದಲ್ಲಿ ಸಕಾರಾತ್ಮಕವಾಗಿ ಇದನ್ನು ಸ್ವೀಕರಿಸಿದ್ದಾರೆ ಹಾಗೆಯೇ, ಕೆಲವರು ಇದನ್ನು ತೀಕ್ಷ್ಣವಾಗಿ ವಿರೋಧಿಸಿದ್ದಾರೆ. ಶಿಕ್ಷಕರು ಪ್ರಮುಖವಾದ ಪಾತ್ರಗಳನ್ನು ವಹಿಸಬಹುದಾದ್ದರಿಂದ, ನಾನು ಈ ಕ್ಷೇತ್ರದಲ್ಲಿರುವ ಎಲ್ಲರೂ ಹೊಸ ನೀತಿಯನ್ನು ಕಾರ್ಯಗತಗೊಳಿಸುವ ಪ್ರಕ್ರಿಯೆಯನ್ನು ಪೂರ್ಣ ಮನಸ್ಸಿನಿಂದ ಬೆಂಬಲಿಸುವಂತೆ ಮತ್ತು ನೀತಿಯನ್ನು ಉತ್ತಮಪಡಿಸುವಂತಹ ರಚನಾತ್ಮಕ ವಿಮರ್ಶೆಯನ್ನು ಮಾಡುವಂತೆ ಮನವೊಲಿಸಲು ಪ್ರಯತ್ನಿಸುತ್ತೇನೆ. ವೈಯಕ್ತಿಕವಾಗಿ ಪ್ರಭಾವವನ್ನು ಕಳೆದುಕೊಳ್ಳುತ್ತೇವೆ ಅಥವಾ ತಮ್ಮ ವ್ಯಾಪಾರದ ಹಿತಾಸಕ್ತಿಗಳಿಗೆ ಹಿನ್ನಡೆಯಾಗುತ್ತದೆ ಎಂಬ ಕಾರಣಗಳಿಂದ ಹೊಸ ನೀತಿಗೆ ನಕಾರಾತ್ಮಕವಾಗಿ ಪ್ರತಿಕ್ರಿಯಿಸುತ್ತಿರುವವರನ್ನು ಮಾತ್ರ ನಾನು ಮನವೊಲಿಸಲು ಪ್ರಯತ್ನಿಸುವುದಿಲ್ಲ.

"ಇದೆಲ್ಲ ಆಗುವುದು ಹೇಗೆ ಸಾಧ್ಯ" ಎಂಬ ಅಸಮಾಧಾನದಲ್ಲಿ ಇರುವವರಲ್ಲಿ ಕೆಲವರು ಇದು ಒಂದು ಅನುಷ್ಠಾನದ ಯೋಜನೆಯಲ್ಲ ಎಂಬುದನ್ನು ಒಪ್ಪಿಕೊಂಡ ಮೇಲೆ ತಮ್ಮ ತೀಕ್ಷ್ಣ ಪ್ರತಿಕ್ರಿಯೆಗಳನ್ನು ನಿಲ್ಲಿಸಬಹುದು. ಕೆಲವರಿಗೆ ರಾಷ್ಟ್ರೀಯ ಶಿಕ್ಷಣ ನೀತಿಯೊಂದಿಗೆ ನಿರ್ದಿಷ್ಟ ಭಿನ್ನಾಭಿಪ್ರಾಯಗಳಿದ್ದು ಅವು ಅವರ ಪ್ರತಿಕ್ರಿಯೆಯನ್ನು ಪ್ರಭಾವಿಸಿರಬಹುದು. ಕೆಲವೊಂದು ಭಿನ್ನಾಭಿಪ್ರಾಯಗಳಿಂದಾಗಿ ಇಡೀ ನೀತಿಯನ್ನೇ ವಿರೋಧಿಸುವುದು ವಿವೇಕಯುತವೇ ಎಂಬುದನ್ನು ಅವರೇ ನಿರ್ಧರಿಸಬೇಕು.

ರಾಷ್ಟ್ರೀಯ ಶಿಕ್ಷಣ ನೀತಿಯ ಭಾಷೆ ಮತ್ತು ಅದರಲ್ಲಿ ವಿವರಗಳು ಇಲ್ಲ ಎನ್ನುವುದರ ಬಗ್ಗೆ ಅನೇಕರಿಗೆ ಆತಂಕವೂ, ನಿರಾಶೆಯೂ ಉಂಟಾಗಿದೆ. ಅನೇಕ ಸಂದರ್ಭಗಳಲ್ಲಿ ಪಠ್ಯವೂ ದ್ವಂದ್ವಾರ್ಥವನ್ನು ನೀಡುವಂತಿದೆ ಮತ್ತು ಬದ್ಧವಾದ ನಿಲುವನ್ನು ತೆಗೆದುಕೊಂಡಿಲ್ಲ. ಇದನ್ನು ನಾವು ನಿರೀಕ್ಷಿಸಲೇಬೇಕು. ಏಕೆಂದರೆ ಯಾವುದೇ ಸರಕಾರದ ಔಪಚಾರಿಕ ಬರವಣಿಗೆಯ ಭಾಷೆಯು ಸಹಜವಾಗಿಯೇ ಜಾಗರೂಕವಾಗಿರುತ್ತದೆ. ಆದರೆ ಇದು ಖಂಡಿತವಾಗಿಯೂ ಸಮಸ್ಯೆಗಳಿಗೆ ಎಡೆ ಮಾಡಿಕೊಡಬಹುದು. ಈಗಲ್ಲದಿದ್ದರೂ ಮುಂದೆ, ದೀರ್ಘಾವಧಿಯಲ್ಲಿ. ಉದ್ದೇಶರಹಿತವಾಗಿಯಾಗಲೀ, ದುರುದ್ದೇಶಪೂರ್ವಕವಾಗಿ ಆಗಲೀ ಅದನ್ನು ಅರ್ಥೈಸುವುದು ಸಾಧ್ಯವಾಗುತ್ತದೆ ಮತ್ತು ಅದು ಉತ್ತಮ ಶಿಕ್ಷಣಕ್ಕೆ ವಿರುದ್ಧವಾಗಬಹುದು. ತತ್ತ್ವಶಾಸ್ತ್ರದಲ್ಲಿ ಹೇಳುವ "ಔದಾರ್ಯದ ತತ್ತ್ವವು" ಇದಕ್ಕೆ ಪರಿಣಾಮಕಾರಿ ಪರಿಹಾರವಾಗಬಹುದು. ಇದರ ಅರ್ಥವೇನೆಂದರೆ, ಪಠ್ಯಕ್ಕೆ ಸಾಧ್ಯವಾದಷ್ಟು ಅತ್ಯುತ್ತಮವಾದ ಮತ್ತು ಅತ್ಯಂತ ಶಕ್ತಿಶಾಲಿಯಾದ ವ್ಯಾಖ್ಯಾನವನ್ನು ನೀಡಿ, ಅದನ್ನು ಬೇಗ ಜಾರಿಗೊಳಿಸುವ ನಿಟ್ಟಿನಲ್ಲಿ ನಮ್ಮ ಎಲ್ಲ ಶಕ್ತಿಯನ್ನೂ ವ್ಯಯಿಸುವುದು. ಇದರಿಂದ, ಜಾರಿಗೊಳಿಸಿದ ನೀತಿಯನ್ನು ಭವಿಷ್ಯದಲ್ಲಿ ಬದಲಾಯಿಸಲು ಕಷ್ಟವಾಗುವಂತೆ ಮಾಡಿದಂತಾಗುತ್ತದೆ.

ಕೇಂದ್ರದಲ್ಲಿ ಅಧಿಕಾರದಲ್ಲಿರುವ ರಾಜಕೀಯ ಪಕ್ಷವನ್ನು ವಿರೋಧಿಸಲು ಬದ್ಧರಾಗಿರುವುದರಿಂದ ಕೂಡ ಈ ನೀತಿಯನ್ನು ವಿರೋಧಿಸುವ ಕೆಲವು ಜನರು ಇದ್ದಾರೆ. ಇನ್ನು ಕೆಲವರು ರಾಷ್ಟ್ರೀಯ ಶಿಕ್ಷಣ ನೀತಿಯ ಪಠ್ಯವು ಬಹುತೇಕವಾಗಿ ಚೆನ್ನಾಗಿದೆ, ಆದರೆ ಸರ್ಕಾರವು ಇದನ್ನು ಎಂದಿಗೂ ಜಾರಿಗೊಳಿಸುವುದಿಲ್ಲ ಎಂದು ನಂಬಿದ್ದಾರೆ. ಇನ್ನು ಕೆಲವರು ಸರ್ಕಾರದ ವಿರೋಧಿಗಳಾಗಿರುವುದರಿಂದ ನೀತಿಯ ಪಠ್ಯಕ್ಕೆ ಅತ್ಯಂತ ಕೆಟ್ಟ ವ್ಯಾಖ್ಯಾನವನ್ನು ನೀಡುತ್ತಾರೆ. ಮತ್ತು ಕೆಲವರಂತೂ ರಾಷ್ಟ್ರೀಯ ಶಿಕ್ಷಣ ನೀತಿಯನ್ನು ಓದೇ ಇಲ್ಲದೆ ಅದರ ಮೇಲೆ ಆಕ್ರಮಣ ಮಾಡುತ್ತಿರುವಂತೆ ಕಾಣುತ್ತಾರೆ.

ರಾಷ್ಟ್ರೀಯ ಶಿಕ್ಷಣ ನೀತಿಯನ್ನು ವಿರೋಧಿಸುವುದು ಒಂದು ಪರಿಣಾಮಕಾರಿ ರಾಜಕೀಯ ರಣತಂತ್ರ ಆಗುವುದಿಲ್ಲ. ಒಂದು ಶಿಕ್ಷಣ ನೀತಿಯನ್ನು ವಿರೋಧಿಸುವ ಮೂಲಕ ಶಕ್ತಿಶಾಲಿ ರಾಜಕೀಯ ಪಕ್ಷವೊಂದು ತೊಂದರೆಗೊಳಗಾಗುವುದು ಸಾಧ್ಯವಿಲ್ಲ. ಬದಲಿಗೆ ಅವರು ರಾಷ್ಟ್ರೀಯ ಶಿಕ್ಷಣ ನೀತಿಯನ್ನು ಓದುವಾಗ 'ಔದಾರ್ಯದ ತತ್ತ್ವವನ್ನು' ಅನುಸರಿಸಿದರೆ, ಅವರಿಗೆ, ಶಿಕ್ಷಣಕ್ಕೆ ಸಂಬಂಧಿಸಿದಂತೆ, ದಶಕಗಳಿಂದಲೂ ತಾವೇ ನಡೆಸಿದ ಹೋರಾಟದಲ್ಲಿರುವ ಅನೇಕ ಸಂಗತಿಗಳು ಇಲ್ಲಿರುವುದು ಕಂಡುಬಂದೀತು. ಒಂದು ಜೀವಂತ ಜನತಾಂತ್ರಿಕ ಸಮಾಜಕ್ಕೆ ಅಡಿಪಾಯವಾಗಿ ಸಾರ್ವತ್ರಿಕ ಶಿಕ್ಷಣ ವ್ಯವಸ್ಥೆಯನ್ನು ಬಲಗೊಳಿಸಲು ಇಲ್ಲಿ ಪ್ರದರ್ಶಿಸಲಾಗಿರುವ ಸ್ಪಷ್ಟವಾದ ಬದ್ಧತೆ ಇದಕ್ಕೊಂದು ಉದಾಹರಣೆ. ಆಗ ಅವರು ಇಂಥ ಅಂಶಗಳನ್ನು ಅನುಷ್ಠಾನಕ್ಕೆ ತರಲು ತಮ್ಮ ಶಕ್ತಿಯನ್ನು ಕೂಡ ಅದಕ್ಕೆ ವಿನಿಯೋಗಿಸಬಹುದು. ಬೇರೆ ಮಾತಿನಲ್ಲಿ ಹೇಳಬೇಕೆಂದರೆ, ಅವರು ಈ ನೀತಿಯಲ್ಲಿ ಹೇಳಲಾಗಿರುವ ಮಾತುಗಳನ್ನು ನಂಬದಿದ್ದರೆ, ಅದನ್ನು ವಾಸ್ತವದಲ್ಲಿ ಜಾರಿಗೆ ತರಲು ಪ್ರಯತ್ನಿಸಿ ಅದರಲ್ಲಿ ಇರಬಹುದಾದ

ಪ್ರೊಳ್ಳುತನವನ್ನು ಬಯಲಿಗೆಳೆಯಬಹುದು. ಇವರಲ್ಲಿ ಅನೇಕರು ಬದ್ಧತೆಯುಳ್ಳ ಶಿಕ್ಷಕರಾಗಿದ್ದಾರೆ. ರಾಷ್ಟ್ರೀಯ ಶಿಕ್ಷಣ ನೀತಿಗೆ ಸಂಬಂಧಿಸಿದಂತೆ ಅವರು ಶಿಕ್ಷಕರಾಗಿ ವರ್ತಿಸಬೇಕೇ ಹೊರತು ರಾಜಕಾರಣಿಗಳಾಗಿ ಅಲ್ಲ.

ನಾವು ಈಗ ಭಾರತೀಯ ಶಿಕ್ಷಣದ ಒಂದು ಅತ್ಯಂತ ನಿರ್ಣಾಯಕವಾಗಬಹುದಾದ ಘಳಿಗೆಯಲ್ಲಿ ಇದ್ದೇವೆ. ಅದು ನಿಜಕ್ಕೂ ಹಾಗೆ ಆಗುವಂತೆ ನಾವು ನೋಡಿಕೊಳ್ಳಬೇಕಾಗಿದೆ. ನಮ್ಮ ರಾಜಕೀಯ ನಿಲುವು, ವೈಚಾರಿಕತೆ ಅಥವಾ ಭಿನ್ನಾಭಿಪ್ರಾಯ ಏನೇ ಇರಲಿ, ರಾಷ್ಟ್ರೀಯ ಶಿಕ್ಷಣ ನೀತಿಯಲ್ಲಿರುವ ಒಳ್ಳೆಯದನ್ನು ಉಪಯೋಗಿಸಿಕೊಂಡರೆ ಮತ್ತು ಅದು ಜಾರಿಯಾಗುವಂತೆ ಮಾಡಿದರೆ ನಾವು ಶಿಕ್ಷಣ ಪದ್ಧತಿಯನ್ನು ಬದಲಾಯಿಸುತ್ತೇವೆ ಮತ್ತು ತನ್ಮೂಲಕ ಭಾರತವು ಉತ್ತಮ ಸ್ಥಿತಿಯೊಂದಕ್ಕೆ ತಲುಪುವುದಕ್ಕೆ ನೆರವಾಗುತ್ತೇವೆ.